





(ಅವತೀರ್ಣ - ಮದೀನಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بسم الله الرحمن الرحيم

1. ಗ್ರಂಥದವರು ಮತ್ತು ಬಹುದೇವಾರಾಧಕರ ಪೈಕಿ ಸತ್ಯನಿಷೇಧಿಗಳಾಗಿದ್ದವರು (ತಮ್ಮ ನಿಷೇಧ ನೀತಿಯಿಂದ) ಹಿಂಜರಿಯುವವರಾಗಿರಲಿಲ್ಲ- ಅವರ ಬಳಿಗೆ ಸುವ್ಯಕ್ತ ಪುರಾವೆಯು ಬಂದು ಬಿಡುವ ವರೆಗೆ-

لم يكن الذين كفروا من اهل
الكتب والمشركين منفكين حتى
تاتيهم البينة ①

2-3. (ಅಂದರೆ) ಅಲ್ಲಾಹನ ವತಿಯಿಂದ, ನೇರವಾದ ಹಾಗೂ ಸರಿಯಾದ ಬರಹಗಳುಳ್ಳ[1] ಪಾವನ ಗ್ರಂಥಗಳನ್ನು ಓದಿ ಹೇಳುವ ಸಂದೇಶ ವಾಹಕನು[2] ಬರುವವರೆಗೆ.

رسول من الله يتلوا صحفا مطهرة ②
فيها كتب قيمة ③

4. ಈ ಹಿಂದೆ ಗ್ರಂಥ ನೀಡಲ್ಪಟ್ಟಿದ್ದವರಲ್ಲಿ ಒಡಕುಂಟಾದುದು ಅವರ ಬಳಿಗೆ (ಸನ್ಮಾರ್ಗದ) ಸುಸ್ಪಷ್ಟ ಆದೇಶ ಬಂದ ಬಳಿಕವಷ್ಟೇ.[3]

وما تفرق الذين اوتوا الكتب الا
من بعد ما جاءتهم البينة ④

5. ಅವರಿಗೆ ನೀಡಲಾಗಿದ್ದ ಆದೇಶವು- ಅವರು ತಮ್ಮ ಧರ್ಮವನ್ನು ನಿಷ್ಕಳಂಕವಾಗಿ ಅಲ್ಲಾಹನಿಗೆ ಮಾತ್ರ ಮೀಸಲಾಗಿಟ್ಟು, ಏಕನಿಷ್ಠೆಯಿಂದ ಅಲ್ಲಾಹನ ದಾಸ್ಯ ಮಾಡಬೇಕು, ನಮಾಝನ್ನು ಸಂಸ್ಥಾಪಿಸಬೇಕು ಮತ್ತು ಝಕಾತನ್ನು ನೀಡಬೇಕು - ಎಂಬುದರ ಹೊರತು ಬೇರೇನೂ ಆಗಿರಲಿಲ್ಲ. ಇದುವೇ ಅತ್ಯಂತ ಸರಿಯಾದ ಧರ್ಮ.

وما امروا الا ليعبدوا الله مخلصين
له الدين حنفاء ويقيموا الصلوة
ويؤتوا الزكوة وذلك دين القيمة ⑤

6. ಗ್ರಂಥದವರು ಹಾಗೂ ಬಹುದೇವಾರಾಧಕರ ಪೈಕಿ ಸತ್ಯನಿಷೇಧಿ

ان الذين كفروا من اهل الكتب

1. ಅರ್ಥಾತ್- ಯಾವುದೇ ರೀತಿಯ ಮಿಥ್ಯೆ, ಪಥಭ್ರಷ್ಟತೆ, ಅಂಧಕಾರ ಮತ್ತು ನೈತಿಕ ಮಾಲಿನ್ಯಗಳ ಸೇರ್ಪಡೆಯಿಲ್ಲದಂತಹ ಗ್ರಂಥಗಳು.
2. ಇಲ್ಲಿ ಸ್ವತಃ ಪ್ರವಾದಿವರ್ಯರನ್ನೇ(ಸ) ಸುವ್ಯಕ್ತವಾದ ಒಂದು ಪುರಾವೆಯೆನ್ನಲಾಗಿದೆ.
3. ಅರ್ಥಾತ್- ಇದಕ್ಕೆ ಮೊದಲು ಗ್ರಂಥ ಕೊಡಲ್ಪಟ್ಟವರು ಅನೇಕ ರೀತಿಯ ಪಥಭ್ರಷ್ಟತೆಯಲ್ಲಿ ಸಿಲುಕಿ ವಿವಿಧ ಪಂಗಡಗಳಾಗಿ ಒಡೆದು ಹೋಗಲು ಕಾರಣ, ಅವರ ಮಾರ್ಗದರ್ಶನಕ್ಕಾಗಿ ಅಲ್ಲಾಹನ ವತಿಯಿಂದ ಸುವ್ಯಕ್ತ ಪುರಾವೆಗಳನ್ನು ಕಳುಹಿಸಲು ಯಾವುದೇ ಲೋಪ ಸಂಭವಿಸಿರುವುದಲ್ಲ. ಅಲ್ಲಾಹನ ವತಿಯಿಂದ ಮಾರ್ಗದರ್ಶನಗಳು ಬಂದ ನಂತರವೇ ಅವರು ಈ ನಿಲುವನ್ನು ತಳೆದಿದ್ದರು. ಆದ್ದರಿಂದ ಅವರ ಪಥಭ್ರಷ್ಟತೆಗೆ ಅವರೇ ಹೊಣೆಗಾರರು.

وَالْمُشْرِكِيْنَ فِيْ نَارِ جَهَنَّمَ خٰلِدِيْنَ
فِيْهَا ۭ اُولٰۗىِٕكَ هُمْ شَرُّ الْبَرِيَّةِ ۶

ಗಳಾಗಿರುವವರು[4] ಖಂಡಿತವಾಗಿಯೂ ನರಕಾಗ್ನಿಯಲ್ಲಿ ಬೀಳುವರು ಮತ್ತು ಸದಾಕಾಲ ಅದರಲ್ಲಿರುವರು. ಇವರು ಅತ್ಯಂತ ನಿಕೃಷ್ಟ ಸೃಷ್ಟಿಗಳು.

اِنَّ الَّذِيْنَ اٰمَنُوْا وَعَمِلُوا الصّٰلِحٰتِ ۙ
اُولٰۗىِٕكَ هُمْ خَيْرُ الْبَرِيَّةِ ۷

7. ಸತ್ಯವಿಶ್ವಾಸ ಸ್ವೀಕರಿಸಿದವರೂ ಸತ್ಕರ್ಮ ಮಾಡಿದವರೂ ಅತ್ಯುತ್ತಮ ಸೃಷ್ಟಿಗಳು.

جَزَاۗؤُهُمْ عِنْدَ رَبِّهِمْ جَنّٰتُ عَدْنٍ
تَجْرِيْ مِنْ تَحْتِهَا الْاَنْهٰرُ خٰلِدِيْنَ
فِيْهَآ اَبَدًا ۭ رَضِيَ اللّٰهُ عَنْهُمْ وَرَضُوْا
عَنْهُ ۭ ذٰلِكَ لِمَنْ خَشِيَ رَبَّهٗ ۸ ع

8. ಅವರ ಪ್ರತಿಫಲ ಅವರ ಪ್ರಭುವಿನ ಬಳಿ ಶಾಶ್ವತ ನಿವಾಸದ ಸ್ವರ್ಗೋದ್ಯಾನಗಳಾಗಿವೆ. ಅವುಗಳ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವುವು. ಅವರು ಅವುಗಳಲ್ಲಿ ಸದಾಕಾಲ ವಾಸಿಸುವರು. ಅಲ್ಲಾಹ್ ಅವರಿಂದ ಸಂಪ್ರೀತನಾದನು ಮತ್ತು ಅವರು ಅಲ್ಲಾಹನಿಂದ ಸಂಪ್ರೀತರಾದರು. ತನ್ನ ಪ್ರಭುವನ್ನು ಭಯ ಪಟ್ಟವನಿಗೆ ಇದೆಲ್ಲವೂ ಇದೆ.

---

4. ಇಲ್ಲಿ ಸತ್ಯನಿಷೇಧವೆಂದರೆ ಪ್ರವಾದಿವರ್ಯರನ್ನು(ಸ) ನಿಷೇಧಿಸುವುದಾಗಿದೆ.